## ಕರ್ನಾಟಕ ವಿಧಾನ ಪರಿಷತ್ತು

ಪ್ರಶ್ನೆ ಸಂಖ್ಯೆ : **1317+1323**

ವಿಧಾನಪರಿಷತ್ ಸದಸ್ಯರ ಹೆಸರು : **ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) ಹಾಗೂ ಶ್ರೀ.ಎಂ.ಸಿ. ವೇಣುಗೋಪಾಲ್ (ವಿಧಾನ ಸಭೆಯಿಂದ ಚುನಾಯಿತರಾದವರು).**

ಉತ್ತರಿಸುವ ದಿನಾಂಕ : 18-03-2020.

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯ ಮಂತ್ರಿಗಳು ಹಾಗೂ ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಸಚಿವರು.

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ನಗರದ ಹೃದಯ ಭಾಗದಲ್ಲಿರುವ ರೇಸ್ ಕೋರ್ಸ್‌ಗೆ ಗುತ್ತಿಗೆ ಆಧಾರದ ಮೇಲೆ ನೀಡಿರುವ ಜಮೀನಿನ ವಿಸ್ತೀರ್ಣವೆಷ್ಟು; ಗುತ್ತಿಗೆ ಅವಧಿಯನ್ನು ಯಾವ ಅವಧಿಯವರೆಗೂ ನೀಡಲಾಗಿದೆ; | ರೇಸ್‌ಕೋರ್ಸ್‌ಗೆ ಒಟ್ಟು ವಿಸ್ತೀರ್ಣ 73 ಎಕರೆ 34.99 ಗುಂಟೆ ಜಮೀನನ್ನು ಗುತ್ತಿಗೆ ಆಧಾರದ ಮೇಲೆ ದಿನಾಂಕ:31.12.2009ರ ವರೆಗೆ ನೀಡಲಾಗಿದೆ. |
| ಆ) | ಕುದುರೆ ಜೂಜಿಗಾಗಿ ನೀಡಿರುವ ಸದರಿ ಜಾಗವನ್ನು ಬಾಡಿಗೆಗೆ ನೀಡಲಾಗಿದೆಯೇ; ಅಥವಾ ಲೀಸ್‌ಗೆ ನೀಡಲಾಗಿದೆಯೇ; ಲೀಸ್‌ಗೆ ನೀಡಿದ್ದಲ್ಲಿ, ಎಷ್ಟು ವರ್ಷದವರೆಗೆ ನೀಡಲಾಗಿದೆ: ಲೀಸ್‌ನ ಮೊತ್ತವೆಷ್ಟು; | ಸದರಿ ಜಾಗವನ್ನು 20 ವರ್ಷಗಳ ಅವಧಿಗೆ ಅಂದರೆ ದಿನಾಂಕ:31.12.2009 ರವರೆಗೆ ಲೀಸ್‌ಗೆ ನೀಡಲಾಗಿದೆ. ಸರ್ಕಾರದ ಆದೇಶ ಸಂಖ್ಯೆ:ಲೋಇ 86 ಬಿಎಂಎಸ್ 1998, ದಿನಾಂಕ:05/09/2000 ರನ್ವಯ ದಿನಾಂಕ:01.01.1989 ರಿಂದ ಪೂರ್ವಾನ್ವಯವಾಗುವಂತೆ ದಿನಾಂಕ:31.12.1999 ರವರೆಗೆ ವಾರ್ಷಿಕ ರೂ.10.00 ಲಕ್ಷಗಳಂತೆ ಹಾಗೂ ದಿನಾಂಕ:01.01.2000 ರಿಂದ 31.12.2009 ರವರೆಗೆ ವಾರ್ಷಿಕ ಶೇ.10 ರಷ್ಟು ದರವನ್ನು ಹೆಚ್ಚಿಸುವ ನಿಬಂಧನೆಗಳಿಗೆ ಒಳಪಟ್ಟು ಗುತ್ತಿಗೆಗೆ ನೀಡಲಾಗಿರುತ್ತದೆ. |
| ಇ) | ಟರ್ಫ್ ಸಂಸ್ಥೆಯು ಗುತ್ತಿಗೆ ಬಾಡಿಗೆಯನ್ನು ಕಾಲಕಾಲಕ್ಕೆ ನೀಡುತ್ತಿದೆಯೇ; ಇಲ್ಲವಾದಲ್ಲಿ, ಸಂಸ್ಥೆಯಿಂದ ಬಾಕಿಯಿರುವ ಮೊತ್ತವೆಷ್ಟು; ಸರ್ಕಾರವು ಬಾಕಿ ಮೊತ್ತವನ್ನು ವಸೂಲಾತಿ ಮಾಡಲು ಕೈಗೊಂಡಿರುವ ಕ್ರಮಗಳೇನು; | ಟರ್ಫ್‌ಕ್ಲಬ್ ಸಂಸ್ಥೆಯು ಕಾಲಕಾಲಕ್ಕೆ ಗುತ್ತಿಗೆ ಬಾಡಿಗೆಯನ್ನು ಸಲ್ಲಿಸುತ್ತಿದ್ದು, ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಸಭೆಯ ನಡವಳಿ ಪತ್ರ ಸಂಖ್ಯೆ: ಲೋಇ/211/ಬಿಎಂಎಸ್ /2005 ದಿನಾಂಕ 03.07.2017 ರನ್ವಯ ಸಂಸ್ಥೆಯ ಒಟ್ಟಾರೆ ಆದಾಯದ ಶೇಕಡಾ 2 ರಷ್ಟನ್ನು 2010-11 ರಿಂದ 2018-2019ರ ಮಾರ್ಚ್ ವರೆಗೆ ಬಾಡಿಗೆ ರೂ. 36,61,08,015.00/-ಗಳು ಬಾಕಿ ಇದ್ದು, ಸದರಿ ಮೊತ್ತವನ್ನು ಸಂಸ್ಥೆಯಿಂದ ವಸೂಲಿ ಮಾಡಲು ಅನುಮತಿ ಕೋರಿ ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ಮಧ್ಯಂತರ ಅರ್ಜಿ ಸಲ್ಲಿಸಲಾಗಿರುತ್ತದೆ. |
| ಈ) | ನಗರದ ಮಧ್ಯ ಭಾಗದಲ್ಲಿರುವ ದೊಡ್ಡ ಜಮೀನನ್ನು ನಗರದ ಅಭಿವೃದ್ದಿಗೆ ಉಪಯೋಗಿಸುವುದರ ಬದಲಾಗಿ ಜೂಜಿಗೆ ಕೊಡುವುದನ್ನು ಸಮಂಜಸವೆಂದು ಸರ್ಕಾರ ಭಾವಿಸಿದೆಯೇ; ಹಾಗಿದ್ದಲ್ಲಿ, ಇದರಿಂದ ಸಮಾಜಕ್ಕಾಗುವ ಉಪಯೋಗವೇನು; | ಇಲ್ಲ.<br><br>ಟರ್ಫ್‌ಕ್ಲಬ್ ಸಂಸ್ಥೆಯವರು 2009ರ ಗುತ್ತಿಗೆ ಅವಧಿ ಮುಗಿದ ನಂತರ ಜಮೀನನ್ನು ಹಸ್ತಾಂತರಿಸದೇ ಉಚ್ಚ ನ್ಯಾಯಾಲಯದಲ್ಲಿ ರಿಟ್ ಪಿಟೀಷನ್ ಸಂ: 30663/2009 ರಲ್ಲಿ ದಾವೆ ಹೂಡಿದ್ದು, ದಿ:22-03-2010ರ ಉಚ್ಚ ನ್ಯಾಯಾಲಯದ, ಆದೇಶದಲ್ಲಿ ರೇಸ್‌ಕೋರ್ಸ್ ಆವರಣವನ್ನು ತೆರವುಗೊಳಿಸಿ ಪರಿಸರ ಸ್ನೇಹಿಯಾಗಿಸಲು ನಿರ್ದೇಶಿಸಿತ್ತು. ಆದರೆ, ಸದರಿ ಆದೇಶದ ವಿರುದ್ಧ, ಟರ್ಫ್‌ಕ್ಲಬ್ ರವರು |

| | | |
|---|---|---|
| ಉ) | ರೇಸ್‌ಕೋರ್ಸ್‌ನ್ನು ಸ್ಥಳಾಂತರಿಸಲು ಸರ್ಕಾರದ ಮುಂದೆ ಯಾವುದಾದರೂ ಪ್ರಸ್ತಾವನೆ ಇದೆಯೇ; ಇದ್ದಲ್ಲಿ, ಅದರ ಮಾಹಿತಿಯನ್ನು ಒದಗಿಸುವುದು; | ಸರ್ವೋಚ್ಚ ನ್ಯಾಯಾಲಯದಲ್ಲಿ ಎಸ್‌ಎಲ್‌ಪಿ ದಾಖಲಿಸಿದ್ದು, ಪ್ರಕರಣ ಬಾಕಿ ಇದ್ದು, ತಡೆಯಾಜ್ಞೆ ತೆರವಿಗಾಗಿ ಕ್ರಮವಹಿಸಲಾಗಿದೆ. |
| ಊ) | ಟರ್ಫ್‌ಕ್ಲಬ್ ಸಂಸ್ಥೆಯ ಮೇಲೆ ರಾಜ್ಯ ಸರ್ಕಾರದ ವಾಣಿಜ್ಯ ತೆರಿಗೆ ಇಲಾಖೆಯು ದಾಳಿ ನಡೆಸಿ, ದಾಖಲೆಗಳನ್ನು ವಶಪಡಿಸಿಕೊಂಡಿರುವ ಬಗ್ಗೆ ಟಿ.ವಿ. ಮಾಧ್ಯಮ/ವೃತ್ತಪತ್ರಿಕೆಗಳಲ್ಲಿ ವರದಿ ಯಾಗಿರುವುದು ನಿಜವೇ; ನಿಜವಾದಲ್ಲಿ ಈ ಬಗ್ಗೆ ಸ್ಪಷ್ಟ ಮಾಹಿತಿಯನ್ನು ನೀಡುವುದು; | ಬೆಂಗಳೂರು ಟರ್ಫ್‌ಕ್ಲಬ್ ಸಂಸ್ಥೆಯ (GSTIN-29AABCV6217G12T) ಮೇಲೆ ರಾಜ್ಯದ ವಾಣಿಜ್ಯ ತೆರಿಗೆಗಳ ಇಲಾಖೆಯ ವತಿಯಿಂದ ತಪಾಸಣೆ/ದಾಳಿ ಕೈಗೊಂಡಿರುವುದಿಲ್ಲ.<br><br>ಆದರೆ. ಟರ್ಫ್‌ಕ್ಲಬ್ ಸಂಸ್ಥೆಯಿಂದ ಪರವಾನಿಗೆ ಪಡೆದು, ಜಿಎಸ್‌ಟಿ ಕಾಯ್ದೆಯಡಿಯಲ್ಲಿ ನೊಂದಾಯಿಸಿ ಟರ್ಫ್‌ಕ್ಲಬ್ ಆವರಣದಲ್ಲಿ ಬೆಟ್ಟಿಂಗ್ ಕಾರ್ಯದಲ್ಲಿ ತೊಡಗಿಸಿಕೊಂಡಿದ್ದ 20 ಬುಕ್ ಮೇಕರ್‌ಗಳ ಮೇಲೆ ದಿ: 07/02/2020 ರಂದು ವಾಣಿಜ್ಯ ತೆರಿಗೆಗಳ ಇಲಾಖೆಯಿಂದ ಪರೀಕ್ಷಾರ್ಥ ಖರೀದಿ ಹಾಗೂ ತಪಾಸಣೆ ಕೈಗೊಳ್ಳಲಾಗಿದೆ.<br><br>ತಪಾಸಣೆಯ ಭಾಗವಾಗಿ ಬುಕ್ ಮೇಕರ್‌ಗಳ ನೊಂದಾಯಿತರ ಸ್ಥಳಗಳಿಗೆ ಭೇಟಿ ನೀಡಿ ದಾಖಲೆಗಳನ್ನು ವಶಪಡಿಸಿಕೊಳ್ಳಲಾಗಿದ್ದು, ಹೆಚ್ಚಿನ ತನಿಖೆ ಪ್ರಗತಿಯಲ್ಲಿರುತ್ತದೆ. |
| ಋ) | ಟರ್ಫ್‌ಕ್ಲಬ್ ಸಂಸ್ಥೆಗೆ ಕುದುರೆ ಓಟದ ಬಗ್ಗೆ ಯಾವ ಅವಧಿಯವರೆಗೂ ಸರ್ಕಾರದಿಂದ ಪರವಾನಗಿ ನೀಡಲಾಗಿದೆ; | ಟರ್ಫ್‌ಕ್ಲಬ್ ಸಂಸ್ಥೆಗೆ ಕುದುರೆ ಪಂದ್ಯಕ್ಕೆ ಮಾರ್ಚ, 2020 ರವರೆಗೆ ಪರವಾನಿಗೆ ನೀಡಲಾಗಿದೆ. |
| ೠ) | ಸದರಿ ರೇಸ್‌ಕೋರ್ಸ್‌ನ್ನು ನಗರದ ಹೊರಭಾಗಕ್ಕೆ ಸ್ಥಳಾಂತರಿಸಬೇಕೆಂಬ ವಿಷಯ ಸಾರ್ವಜನಿಕರಿಂದ ಹಾಗೂ ಸದನದಲ್ಲೂ ಕೂಡ ಅನೇಕ ಬಾರಿ ಚರ್ಚೆಯಾಗಿದ್ದು, ಈ ಕುರಿತು ಸರ್ಕಾರ ನಿಲುವೇನು; | ಸರ್ವೋಚ್ಚ ನ್ಯಾಯಾಲಯದಲ್ಲಿ ಪ್ರಕರಣ ಬಾಕಿ ಇದ್ದು, ನ್ಯಾಯಾಲಯದ ತೀರ್ಪನ್ನು ನಿರೀಕ್ಷಿಸಲಾಗಿದೆ. |

**ಸಂಖ್ಯೆ: ಲೋಇ 14 ಬಿಎಲ್‌ಕ್ಯೂ 2020.**

(ಗೋವಿಂದ ಎಂ. ಕಾರಜೋಳ)
ಉಪ ಮುಖ್ಯಮಂತ್ರಿಗಳು,
ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಇಲಾಖೆ